ರಕ್ಷಣೆಯ ಪ್ರಜ್ಞಾವಂತ ನಾಗರೀಕ ಕರ್ತವ್ಯವಾಗಿದೆ. ಭವಿಷ್ಯದ ಉತ್ತಮ ಪರಿಸರದ ನಿರ್ಮಾಣಕ್ಕೆ ಇಂದು ನಾವು ಗಿಡಗಳನ್ನು ನೆಟ್ಟು ಪೋಷಿಸಬೇಕು ಎಂದು ತಿಳಿಸಿದರು. ಮಣಿಪಾಲ ಪದವಿ ಪೂರ್ವ ಕಾಲೇಜು ಹಾಗೂ ಯು. ಕಮಲಾ ಬ್ಯಾ ಪ್ರೌಢಶಾಲೆ ಕಡಿಯಾಳಿ ಇಲ್ಲಿಯ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳು, ಗೈಡ್ಸ್ ಶಿಕ್ಷಕಿ ಕು. ವನಿತಾ ಎಂ. ರಾವ್, ಎ.ಎಲ್.ಟಿ.(ಗೈ) ರವರ ನೇತೃತ್ವದಲ್ಲಿ ಗಿಡಗಳನ್ನು ನೆಟ್ಟರು. ಕೇಂದ್ರ ಸ್ಥಾನಿಕ ಆಯುಕ್ತರು (ಸ್ಕೌಟ್ಸ್) ಶ್ರೀ ಬಿ.ಜಿ. ವಾರಂಬಳ್ಳಿ, ಶ್ರೀ ವಿಂಗ್ ಕಮಾಂಡರ್ ಭೋಜರಾಜ್, ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್) ಭಾಗವಹಿಸಿದ್ದರು. ರೋಟರಿ ಉಡುಪಿ ಇವರ ಸಹಕಾರದಲ್ಲಿ ಈ ಕಾರ್ಯಕ್ರಮ ನಡೆಯಿತು. ರೋಟರಿ ಅಧ್ಯಕ್ಷ ಶ್ರೀ ಕೆ.ಆರ್. ಉಪಾಧ್ಯ, ಕಾರ್ಯದರ್ಶಿ ಶ್ರೀ ಎಸ್. ಕಾಮತ್ ಹಾಗೂ ಇತರ ಪದಾಧಿಕಾರಿಗಳು ಭಾಗವಹಿಸಿದ್ದರು.

## ಹಾಸನ

ಹಾಸನ ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ ಮತ್ತು ಕೆಂಚಟ್ಟಹಳ್ಳಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಸಂಯುಕ್ತ ಆಶ್ರಯದಲ್ಲಿ ಇತ್ತೀಚೆಗೆ ನಡೆದ ಹೊರಸಂಚಾರ ಮತ್ತು ವನಮಹೋತ್ಸವ ಏರ್ಪಡಿಸಲಾಗಿತ್ತು. ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿರವರು ಸ್ಕೌಟ್ಸ್-ಗೈಡ್ಸ್‌ಗಳ ಹೊರ ಸಂಚಾರ ಕಾರ್ಯಕ್ರಮಕ್ಕೆ ಜಿಲ್ಲಾ ಸ್ಕೌಟ್ ಭವನದಿಂದ ಹಸಿರು ನಿಶಾನೆ ತೋರಿಸಿ ಚಾಲನೆ ನೀಡಿದರು. ಜಿಲ್ಲಾ ಸ್ಕೌಟ್ ಭವನದಿಂದ ಕಾಲ್ನಡಿಗೆಯಲ್ಲಿ ಹೊರ ಸಂಚಾರ ಹೊರಟ ಸ್ಕೌಟ್ಸ್ -ಗೈಡ್ಸ್‌ಗಳು ನಗರದ ಬಿ.ಎಂ. ರಸ್ತೆಯಿಂದ ಹಾದು ಡೈರಿ ವೃತ್ತ, ಮೂಲಕ ಕೆಂಚಟ್ಟಹಳ್ಳಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆವರೆಗೆ ಕಾಲ್ನಡಿಗೆಯಲ್ಲಿ 7 ಕೀ.ಮೀ. ಸಂಚರಿಸಿದರು.

ಶಾಲೆಯ ಆವರಣದಲ್ಲಿ ನಡೆದ ವನಮಹೋತ್ಸವ ಕಾರ್ಯಕ್ರಮಕ್ಕೆ ಜಿಲ್ಲಾ ಅರಣ್ಯ ಉಪ ಸಂರಕ್ಷಣಾಧಿಕಾರಿ ಗಳಾದ ಶ್ರೀ ಬಾಲಚಂದ್ರರವರು ಆಗಮಿಸಿ ಗಿಡನೆಟ್ಟು ಮಾತನಾಡುತ್ತಾ ಪರಿಸರ ಕಾಪಾಡಲು ಕರೆನೀಡಿದರು. ಇದೇ ಸಂದರ್ಭದಲ್ಲಿ ಉಪಸ್ಥಿತರಿದ್ದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಾದ ಶ್ರೀ ಪುರುಷೋತ್ತಮ ಪ್ರಭು ರವರು ಸಸಿ ನೆಟ್ಟು ಮಾತನಾಡುತ್ತಾ ಪ್ರತಿಯೊಬ್ಬರು ಹುಟ್ಟಿದ ಹಬ್ಬದ ದಿನವನ್ನು ಕೇಕ್ ನೀಡುವ ಜೊತೆಗೆ ಒಂದೊಂದು ಸಸಿಯನ್ನು ನೀಡಲು ಕರೆ ನೀಡಿದರು.

ಸಮಾರಂಭದಲ್ಲಿ ಕೆಂಚಟ್ಟಹಳ್ಳಿ ಶಾಲೆಯ ಮುಖ್ಯೋಪಾದ್ಯಾಯರಾದ ಶ್ರೀಮತಿ ಈರಮ್ಮ, ತಾಲ್ಲೂಕು ಪಂಚಾಯ್ತಿ ಸದಸ್ಯರಾದ ಶ್ರೀ ದಿನೇಶ್, ಶಾಲಾಭಿವೃದ್ಧಿ ಸಮಿತಿಯ ಅಧ್ಯಕ್ಷರಾದ ಶ್ರೀಮತಿ ಪಂಕಜ ಮತ್ತು ಸದಸ್ಯರು, ಶಿಕ್ಷಣ ಇಲಾಖೆಯ ಸಿ.ಎ.ಇ.ಓ. ಗಳಾದ ಶ್ರೀ ಗಂಗಾಧರಪ್ಪ, ಗ್ರಾಮ ಪಂಚಾಯ್ತಿ ಸದಸ್ಯರಾದ ಶ್ರೀ ಕುಮಾರ ಮತ್ತು ಕೆಂಚಟ್ಟಹಳ್ಳಿ ಗ್ರಾಮಸ್ಥರು ಹಾಗೂ ಜಿಲ್ಲಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ವೈ.ಎನ್. ವೀರಭದ್ರಪ್ಪ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿರವರು, ಸ್ಥಳೀಯ ಕಾರ್ಯದರ್ಶಿ ಶ್ರೀ ಎಸ್. ಆರ್. ಚಂದ್ರಾಚಾರ್, ಶ್ರೀ ಮುತ್ತೇಗೌಡ ರಾಜ್ಯ ಸ್ಕೌಟರ್ ಪ್ರತಿನಿಧಿ ಶ್ರೀಮತಿ ವೈ.ಡಿ. ಪದ್ಮ ರಾಜ್ಯ ಗೈಡರ್ ಪ್ರತಿನಿಧಿ, ಹಿರಿಯ ಸ್ಕೌಟರ್ ಆದ ಶ್ರೀ ಜವರಯ್ಯರವರು ಉಪಸ್ಥಿತರಿದ್ದರು. ಈ ಕಾರ್ಯಕ್ರಮಕ್ಕೆ ಶ್ರೀ ಗಿರೀಶ್ ರಾಷ್ಟ್ರೀಯ ಸೇವಾ ಕಾರ್ಯಕರ್ತರು, ಪಾಲ್ಗೊಂಡು ಸಸಿಗಳನ್ನು ನೆಡಲು ಮಕ್ಕಳೊಂದಿಗೆ ಸಹಕರಿಸಿದರು. ಈ ಕಾರ್ಯಕ್ರಮಕ್ಕೆ ನಗರ ಮತ್ತು ಗ್ರಾಮೀಣ ಪ್ರದೇಶಗಳ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

## ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ನಾಯಕತ್ವ ತರಬೇತಿ ಶಿಬಿರ

ಸದರನ್ ರೈಲ್ವೆ ಸ್ಟೇಟ್ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸೆಂಟ್ರಲ್ ಡಿಸ್ಟ್ರಿಕ್ಟ್ ಪಾರ್ಕ್ ಟೌನ್ ಚನ್ನೈ ಇವರು ಹಾಸನ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನದಲ್ಲಿ ದಿನಾಂಕ 11-07-09 ರಿಂದ 13-07-09 ರ ವರೆಗೆ ಮೂರು ದಿನಗಳ ಕಾಲ ರೈಲ್ವೆ ಸ್ಕೌಟ್ಸ್ ಮತ್ತು ಗೈಡ್ಸ್, ರೋವರ್ಸ್ – ರೇಂಜರ್ಸ್‌ಗಳಿಗೆ ನಾಯಕತ್ವ ತರಬೇತಿ ಶಿಬಿರವನ್ನು ಸಂಘಟಿಸಿದ್ದರು. ದಿನಾಂಕ 13-07-09 ರಂದು ನಡೆದ ಸಮಾರೋಪ ಸಮಾರಂಭದಲ್ಲಿ ಡಾ॥ ವೈ.ಎನ್. ವೀರಭದ್ರಪ್ಪ ಜಿಲ್ಲಾ ಮುಖ್ಯ ಆಯುಕ್ತರು ಅತಿಥಿಗಳಾಗಿ ಆಗಮಿಸಿದ್ದರು. ಸಮಾರಂಭದಲ್ಲಿ ಇನ್ನೊರ್ವ ಅತಿಥಿಯಾಗಿ ಆಗಮಿಸಿದ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎನ್. ಯಾಜಿರವರು ಮಾತನಾಡಿ, ಇತರೇ ರಾಜ್ಯಗಳಿಂದ ಬಂದ ಸ್ಕೌಟ್ಸ್-ಗೈಡ್ಸ್ ಮಕ್ಕಳಿಗೆ ಶಿಬಿರ ನಡೆಸಲು ಬೇಕಾದ ಅಗತ್ಯ ಸೌಕರ್ಯಗಳನ್ನು ಒದಗಿಸಿಕೊಡುವುದಾಗಿ ತಿಳಿಸಿ ಎಲ್ಲರಿಗೂ ಶುಭ ಕೋರಿದರು.

ದಿನಾಂಕ 15-07-2009 ರಂದು ಹಾಸನ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನದ ಆವರಣದಲ್ಲಿ ಹಾಸನ ಜಿಲ್ಲಾ ಮಟ್ಟದ ಸ್ಕೌಟ ಶಿಕ್ಷಕರ ಹಾಗೂ ಗೈಡ್ ಶಿಕ್ಷಕಿಯರ ಸಮಾವೇಶವನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ವತಿಯಿಂದ ಏರ್ಪಡಿಸಲಾಗಿತ್ತು. ಈ ಸಮಾವೇಶದಲ್ಲಿ ಹಾಸನ ಜಿಲ್ಲಾದ್ಯಂತ 120 ಸ್ಕೌಟ್ ಶಿಕ್ಷಕ, ಗೈಡ್ ಶಿಕ್ಷಕಿಯರು ಆಗಮಿಸಿ ಸ್ಕೌಟಿಂಗ್ – ಗೈಡಿಂಗ್‌ನ ವಿವಿಧ ವಿಷಯಗಳ ಬಗ್ಗೆ ವಿಚಾರ ವಿನಿಮಯ ಮಾಡಿದರು. ಹಾಸನ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿರವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.

ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ವೈ. ಎನ್. ವೀರಭದ್ರಪ್ಪರವರು ಸಮಾರಂಭದಲ್ಲಿ ಉಪಸ್ಥಿತರಿದ್ದು ಸಮಾರಂಭದ ಉದ್ದೇಶದ ಬಗ್ಗೆ ತಿಳಿಸಿದರು. ಸಮಾರಂಭದಲ್ಲಿ ಎಂ.ಎಸ್. ಪ್ರಕಾಶ್, ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡ ರಾಜ್ಯ ಸ್ಕೌಟ್ ಪ್ರತಿನಿಧಿ ಶ್ರೀ ಹೆಚ್. ಎಂ. ಗೌಡಯ್ಯ, ಶ್ರೀಮತಿ ವೈ.ಡಿ. ಪದ್ಮ ಗೈಡರ್ ಪ್ರತಿನಿಧಿ, ಎಲ್ಲಾ ಸ್ಥಳೀಯ ಸಂಸ್ಥೆಗಳು ಕಾರ್ಯದರ್ಶಿಗಳು, ಸಹಾಯಕ ಜಿಲ್ಲಾ ಆಯುಕ್ತರುಗಳು ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಕೆ. ಭರತ್, ಗೈಡ್ ತರಬೇತಿ ಆಯುಕ್ತೆಯಾದ ಕಾಂಚನ ಮಾಲಾ ಶ್ರೀ ಎಲ್. ಟಿ. ಲೋಕೇಶ್, ರಾಜ್ಯ ಸಹಾಯಕ ಸಂಘಟನಾ ಆಯುಕ್ತರು ಉಪಸ್ಥಿತರಿದ್ದು, ವಿವಿಧ ವಿಷಯಗಳ ಬಗ್ಗೆ ಮಾಹಿತಿ ನೀಡಿದರು.

ಸಮಾರೋಪ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಹಾಸನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಹೆಚ್. ಕೆ. ಪುಷ್ಪಲತರವರು ಆಗಮಿಸಿದ್ದರು. ಕೊನೆಯಲ್ಲಿ ಗೈಡರ್ ಪ್ರತಿನಿಧಿ ವೈ. ಡಿ. ಪದ್ಮ ವಂದನೆ ಸಲ್ಲಿಸಿದರು. ಇದೇ ಸಂದರ್ಭದಲ್ಲಿ ಹಿಮಾಲಯ ವುಡ್ ಬ್ಯಾಡ್ಜ್ ಪಡೆದ ಗೈಡರ್‌ಗಳಾದ ಶ್ರೀಮತಿ ಕಾಮೇಶ್ವರಿ ಮತ್ತು ಶಾಂತಕುಮಾರಿ ಇವರಿಗೆ ಹಾಗೂ ಸ್ಕೌಟ್ ಶಿಕ್ಷಕರಿಗೆ ಪ್ರಮಾಣ ಪತ್ರಗಳನ್ನು ವಿತರಿಸಲಾಯಿತು.

## ಸ್ಕೌಟ್ಸ್ - ಗೈಡ್ಸ್‌ಗಳಿಗೆ ಜಿಲ್ಲಾ ಮಟ್ಟದ ರಾಜ್ಯಪುರಸ್ಕಾರ ಪೂರ್ವಸಿದ್ಧತಾ ತರಬೇತಿ ಶಿಬಿರ

ಹಾಸನ ಜಿಲ್ಲಾ ಸಂಸ್ಥೆಯ ವತಿಯಿಂದ ಹಾಸನದ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನದಲ್ಲಿ ದಿನಾಂಕ : 1-8-09 ರಿಂದ 2-8-09 ರ ವರೆಗೆ ಜಿಲ್ಲಾ ಮಟ್ಟದ ಸ್ಕೌಟ್ಸ್-ಗೈಡ್ಸ್‌ಗಳ ರಾಜ್ಯಪುರಸ್ಕಾರ ಪೂರ್ವ ಸಿದ್ಧತಾ ತರಬೇತಿ ಶಿಬಿರವನ್ನು ಏರ್ಪಡಿಸಲಾಗಿತ್ತು.

ಈ ಶಿಬಿರದಲ್ಲಿ ಹಾಸನ ಜಿಲ್ಲೆಯ ಆಯ್ದ ಶಾಲೆಗಳ 55 ಸ್ಕೌಟ್ಸ್-ಗೈಡ್ಸ್ ಮಕ್ಕಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀ ಪುಟ್ಟಸ್ವಾಮಿ ಸ್ಕೌಟ್ ಮಾಸ್ಟರ್ ಸರ್ಕಾರಿ ಪ್ರೌಢಶಾಲೆ ಬಾಚೇನಹಳ್ಳಿ ಅರಸೀಕೆರೆ ತಾಲ್ಲೋಕ್ ಇವರು ಆಗಮಿಸಿ ಕಾರ್ಯ ನಿರ್ವಹಿಸಿದರು. ಗೈಡ್ ವಿಭಾಗಕ್ಕೆ ಕಾಂಚನ ಮಾಲಾ ನಿವೃತ್ತ ಗೈಡ್ ಶಿಕ್ಷಕಿ ಬಾಳ್ಳುಪೇಟೆ ಇವರು ನಾಯಕಿಯಾಗಿ ಕಾರ್ಯನಿರ್ವಹಿಸಿದರು. ಶಿಬಿರದ ಉದ್ಘಾಟನೆಯನ್ನು ದಿನಾಂಕ 1-8-09 ರಂದು ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರಿಯುತ ಪ್ರಕಾಶ್ ಎಸ್. ಯಾಜಿ ರವರು ನೆರವೇರಿಸಿದರು. ಜಿಲ್ಲಾ ಗೈಡ್ ಆಯುಕ್ತೆಯಾದ ಶೈಲಾ ಅಭಿನಂದನ್‌ರವರು ಶಿಬಿರಕ್ಕೆ ಭೇಟಿ ನೀಡಿದ್ದರು. ಶ್ರೀಯುತ ವೈ. ಎನ್. ವೀರಭದ್ರಪ್ಪ ಜಿಲ್ಲಾ ಮುಖ್ಯ ಆಯುಕ್ತರು ದಿನಾಂಕ 2-8-09 ರಂದು ನಡೆದು ಸರ್ವಧರ್ಮ ಪ್ರಾರ್ಥನೆಯಲ್ಲಿ ಭಾಗವಹಿಸಿ ಶಿಬಿರದಲ್ಲಿ ಭಾಗವಹಿಸಿದ ಎಲ್ಲರೂ ರಾಜ್ಯ ಪುರಸ್ಕಾರ ಸ್ಕೌಟ್-ಗೈಡ್ ಗಳಾಗುವಂತೆ ಆಶಿಸಿದರು.

# ರಾಯಚೂರು

ರಾಯಚೂರು ಜಿಲ್ಲಾ ಸಂಸ್ಥೆಯ ವತಿಯಿಂದ 2009-10ನೇ ಸಾಲಿನ ಜಿಲ್ಲಾಮಟ್ಟದ ಸ್ಕೌಟ್ ಮಾಸ್ಟರ್ಸ್, ಕಬ್ ಮಾಸ್ಟರ್ಸ್, ಫ್ಲಾಕ್ ಲೀಡರ್, ಗೈಡ್ ಕ್ಯಾಪ್ಟನ್ ರವರ ಒಂದು ದಿನದ ಸಮಾವೇಶವನ್ನು ಟಾಗೋರ ಸ್ಮಾರಕ ಸಭಾ ಭವನದಲ್ಲಿ ಏರ್ಪಡಿಸಲಾಗಿತ್ತು. ನಗರ ಸಭಾ ಸದಸ್ಯರಾದ ಶ್ರೀ ಬೆ. ಶಿವಮೂರ್ತಿ ದೀಪ ಬೆಳಗಿಸುವುದರ ಮೂಲಕ ಕಾರ್ಯಕ್ರಮ ಉದ್ಘಾಟಿಸಿದರು.

ಜಿಲ್ಲೆಯಲ್ಲಿ ಸ್ಕೌಟ್ಸ್, ಗೈಡ್ಸ್ ನಿರಂತರ ಚಟುವಟಿಕೆಯಲ್ಲಿದ್ದು ಶಾಲಾ ಮಕ್ಕಳಲ್ಲಿ ಮತ್ತು ಯುವಕರಲ್ಲಿ ಶಿಸ್ತನ್ನು ಬೆಳೆಸುವಲ್ಲಿ ಸದಾ ಕ್ರಿಯಾತ್ಮಕವಾಗಿದೆ ಎಚಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು. ಜಿಲ್ಲಾ ಆಯುಕ್ತ (ಸ್ಕೌ) ಡಾ॥ ಆರ್. ನರಸಿಂಹಮೂರ್ತಿ ಪ್ರಾಸ್ತಾವಿಕವಾಗಿ ಮಾತನಾಡಿದರು ಜಿಲ್ಲಾ ಸಂಘಟನಾ ಆಯುಕ್ತರಾದ ಖಾಜಾ ಹುಸೇನ ಆನಾಹೊಸೂರ ಕಾರ್ಯಕ್ರಮ ನಿರೂಪಿಸಿದರು. ಶ್ರೀ ರಾಮಲಿಂಗಪ್ಪ ಸ್ಕೌ. ಮಾಸ್ಟರ್ ವಂದನಾರ್ಪಣೆ ಮಾಡಿದರು.

# ಶಿವಮೊಗ್ಗ

## ಜಿಲ್ಲಾ ಮಟ್ಟದ ಸ್ಕೌಟರ್ ಗೈಡರ್ ಸಮಾವೇಶ

ದಿನಾಂಕ 25-07-2009 ಬೆಳಿಗ್ಗೆ 10-30ಕ್ಕೆ ಜಿಲ್ಲಾ ಮಟ್ಟದ ಸ್ಕೌಟರ್-ಗೈಡರ್ ಸಮಾವೇಶವು ಧ್ವಜಾರೋಹಣ ದೊಂದಿಗೆ ಪ್ರಾರಂಭವಾಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಟಿ.ವಿ. ನಾರಾಯಣಶಾಸ್ತ್ರಿಯವರು. ದೀಪ ಬೆಳಗಿಸವುದರೊಂದಿಗೆ ಉದ್ಘಾಟಿಸಿದರು. ಈ ಸಭೆಯಲ್ಲಿ 100 ಸ್ಕೌಟರ್, ಗೈಡರ್ಸ್‌ಗಳು ಭಾಗವಹಿಸಿದ್ದರು. ಪ್ರೊ. ಎ.ಎಸ್. ಚಂದ್ರಶೇಖರ್ ಜಿಲ್ಲಾ ಆಯುಕ್ತರು ಸ್ಕೌಟರ್, ಗೈಡರ್‌ಗಳನ್ನು ಉದ್ದೇಶಿಸಿ ಮಾತನಾಡಿದರು. ನಂತರ ಶ್ರೀ ಎಂ. ಜಿ. ಶಿವಕುಮಾರ್. ಶ್ರೀಮತಿ ಅರುಣಮಾಲಾ ಜಿಲ್ಲಾ ತರಬೇತಿ ಆಯುಕ್ತರುಗಳು ಶ್ರೀ ಬಿ.ಎಂ. ಜಯಾಚಾರ್, ಡಿ.ಓ.ಸಿ. ಸ್ಕೌಟರ್, ಗೈಡರ್‌ಗಳಿಗೆ ಪ್ರಥಮ, ದ್ವಿತೀಯ, ತೃತೀಯ ಸೋಪಾನಗಳ ಹಾಗೂ ಜಿಲ್ಲಾ ಪುರಸ್ಕಾರ ಮತ್ತು ರಾಜ್ಯ ಪುರಸ್ಕಾರ ತಯಾರು ಮಾಡಲು ಮಾಹಿತಿಯನ್ನು ನೀಡಿದರು.

### ಅಭಿನಂದನೆಗಳು

### ಶಿವಮೊಗ್ಗ ಜಿಲ್ಲೆಯಲ್ಲಿ 2008-09ನೇ ಸಾಲಿನ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕಗಳಿಸಿರುವ ಸ್ಕೌಟ್ ವಿದ್ಯಾರ್ಥಿಗಳು

ಕ್ರಸಂ. ಹೆಸರು ಶಾಲೆಯ ಹೆಸರು ತಾಲ್ಲೂಕು ಒಟ್ಟು ಅಂಕ ಗಳಿಸಿದ ಅಂಕ ಶೇಕಡವಾರು

| | | | | | | |
|---|---|---|---|---|---|---|
| 1. | ಚಿನ್ಮಯ ಎಂ. | ವಿದ್ಯಾಭಿವೃದ್ಧಿ ಸಂಘ ಪ್ರೌಢಶಾಲೆನಿ ಸರಾಣಿ | ಸೊರಬ | 625 | 582 | 93.12% |
| 2. | ಚಿನ್ಮಯಮೂರ್ತಿ ಕೆ.ಆರ್. | ಹೊಂಗಿರಣ ಸ್ಕೂಲ್ ಆಫ್ ಎಕ್ಸೆಲೆನ್ಸ್, ಅಮಟೆಕೊಪ್ಪ | ಸಾಗರ | 500 | 461 | 92.2% |
| 3. | ಪ್ರಮೋದ ಡಿ.ವೈ. | ಸರ್ಕಾರಿ ಪ್ರೌಢಶಾಲೆ, ಈಸೂರು | ಶಿಕಾರಿಪುರ | 625 | 576 | 92 % |
| 4. | ಅಭಿಷೇಕ್ ಹೆಚ್.ಕೆ. | ಹೊಂಗಿರಣ ಸ್ಕೂಲ್ ಆಫ್ ಎಕ್ಸೆಲೆನ್ಸ್, ಅಮಟೆಕೊಪ್ಪ | ಸಾಗರ | 500 | 459 | 91.8% |
| 5. | ಶ್ರೇಯಾ ಆರ್. ಭಾಗ್ವತ್ | ಹೊಂಗಿರಣ ಸ್ಕೂಲ್ ಆಫ್ ಎಕ್ಸೆಲೆನ್ಸ್, ಅಮಟೆಕೊಪ್ಪ | ಸಾಗರ | 500 | 455 | 91 % |
| 6. | ಬಾಲಚಂದ್ರ ಎಂ. ಹೆಗ್ಡೆ | ಹೊಂಗಿರಣ ಸ್ಕೂಲ್ ಆಫ್ ಎಕ್ಸೆಲೆನ್ಸ್, ಅಮಟೆಕೊಪ್ಪ | ಸಾಗರ | 500 | 454 | 90.8% |



## ಚಾಮರಾಜನಗರ ಜಿಲ್ಲೆ

**ಟಿ.ವಿ. ಗೀತಾ,** ರಾಜ್ಯ ಪುರಸ್ಕಾರ್ ಗೈಡ್ (ಗೈಡ್ ನಾಯಕಿ)
ನಿಸರ್ಗ ಸ್ವತಂತ್ರ್ಯ ಪದವಿ ಪೂರ್ವ ಕಾಲೇಜು, ಕೊಳ್ಳೇಗಾಲ
ಇಲ್ಲಿ ಅಭ್ಯಸಿಸುತ್ತಿದ್ದ ವಿದ್ಯಾರ್ಥಿನಿ
2008-09ನೇ ಸಾಲಿನಲ್ಲಿ ನಡೆದ 2ನೇ ಪಿ.ಯೂ.ಸಿ. ಪರೀಕ್ಷೆಯಲ್ಲಿ 92.5%
ಹಾಗೂ ವಿಜ್ಞಾನ ವಿಭಾಗದಲ್ಲಿ ಜಿಲ್ಲೆಗೆ ಪ್ರಥಮ ಸ್ಥಾನ ಗಳಿಸಿದ್ದಾರೆ.

## ಬಳ್ಳಾರಿ

### ಸಾಹಸ ಚಟುವಟಿಕೆಗಳ ಶಿಬಿರ

ದಿನಾಂಕ 30-07-09 ರಂದು ಸಂಡೂರು ತಾಲೂಕಿನ ಸ್ಕೌಟ್ಸ್-ಗೈಡ್ಸ್‌ಗಳು ಸಂಡೂರು ಅರಣ್ಯ ಪ್ರದೇಶದಲ್ಲಿ ಸಾಹಸ ಚಟುವಟಿಕೆಗಳ ಶಿಬಿರದಲ್ಲಿ ಭಾಗವಹಿಸಿದ್ದರು. ತಾಲೂಕಿನ 85 ಸ್ಕೌಟ್-ಗೈಡ್‌ಗಳು ಈ ಶಿಬಿರದಲ್ಲಿ, ಕಾಡಿನಲ್ಲಿ ಇರುವ ಔಷಧಿ ಸಸ್ಯಗಳ ಬಗ್ಗೆ ಮಾಹಿತಿ ಪಡೆಯುವುದು. ಅಲ್ಲದೇ ಕಾಡಿನಲ್ಲಿ ಇರುವ 'ಸಸ್ಯತೋಟದ ಸಸ್ಯಗಳ ಬಗ್ಗೆ ವಿವರಣೆ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ಪಡೆದು ತಿಳಿದುಕೊಂಡರು. ಈ ಶಿಬಿರದ ನಾಯಕತ್ವವನ್ನು ಆಯಾ ಶಾಲೆಗಳ ಶಿಕ್ಷಕ-ಶಿಕ್ಷಕಿಯರು ವಹಿಸಿಕೊಂಡಿದ್ದರು.

### ಬಳ್ಳಾರಿ ಜಿಲ್ಲಾ ಹಡಗಲಿ ತಾಲ್ಲೂಕಿನ ದಳಗಳ ಪೆಟ್ರೋಲ್ ನಾಯಕರ ಹಾಗೂ ಸಾಹಸ ಚಟುವಟಿಕೆಗಳ ಶಿಬಿರ

ದಿನಾಂಕ 18-08-2009ರಿಂದ 22-08-2009 ರ ವರೆಗೆ ಹಡಗಲಿ ಪಟ್ಟಣದ ಬಾಲಭವನದಲ್ಲಿ ಪೆಟ್ರೋಲ್ ನಾಯಕರ ಹಾಗೂ ಸಾಹಸ ಚಟುವಟಿಕೆಗಳ ಶಿಬಿರ ಏರ್ಪಡಿಸಲಾಗಿತ್ತು. ಈ ಶಿಬಿರದಲ್ಲಿ 80 ಸ್ಕೌಟ್ಸ್-ಗೈಡ್ಸ್‌ಗಳು ಹಡಗಲಿ ತಾಲ್ಲೂಕಿನಿಂದ ಭಾಗವಹಿಸಿದ್ದರು. ಶಿಬಿರವನ್ನು ಶ್ರೀ ಆರ್. ವೆಂಕಣ್ಣ ಜಿಲ್ಲಾ ಮುಖ್ಯ ಆಯುಕ್ತರು ಬಳ್ಳಾರಿ ಇವರು ಉದ್ಘಾಟನೆ ಮಾಡಿದರು. ಈ ಶಿಬಿರಕ್ಕೆ ಶ್ರೀ ಆರ್. ಚಂದ್ರಪ್ಪ ಕೊಟ್ಟೂರು ಇವರು ನಾಯಕರಾಗಿ, ಶ್ರೀಮತಿ ಮಂಜುಳಾ ಎ.ಎಸ್.ಓ.ಸಿ.(ಗೈಡ್) ದಾವಣಗೆರೆ ಇವರು ಸಹಾಯಕರಾಗಿ ಶಿಬಿರವನ್ನು ಯಶಸ್ವಿ ಮಾಡಿದರು. ಸಮಾರೋಪ ಸಮಾರಂಭಕ್ಕೆ ಪ್ರೊ. ಶಾಂತಮೂರ್ತಿ ಕುಲಕರ್ಣಿ ಹಾಗೂ ಸಹಾಯಕ ಜಿಲ್ಲಾ ಆಯುಕ್ತರು ಹಡಗಲಿ ಇವರು ಮುಖ್ಯ ಅಥಿತಿಗಳಾಗಿದ್ದರು. ಶ್ರೀ ಆರ್. ವೆಂಕಣ್ಣ, ಅಧ್ಯಕ್ಷತೆ ವಹಿಸಿದ್ದರು. ತಮ್ಮ ಬಾಷಣದಲ್ಲಿ ಮಕ್ಕಳಿಗೆ ಉಚಿತ ಸಮವಸ್ತ್ರವನ್ನು ಶ್ರೀ ಎಂ.ಪಿ. ಪ್ರಕಾಶ್ ಪ್ರತಿಷ್ಠಾನ ವತಿಯಿಂದ ಪ್ರತಿವರ್ಷ ಕೂಡಿಸುವುದಾಗಿ ಆಶ್ವಾಸನೆ ನೀಡಿದರು. ಶ್ರೀ ರಾಮನಗೌಡ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಡಗಲಿ ಇವರು ದಿನಾಂಕ 19-08-2009 ರಂದು ಶಿಬಿರಕ್ಕೆ ಬೇಟಿ ನೀಡಿ ಮುಂದೆ ನಡೆಯುವ ಚಟುವಟಿಕೆ ನಡೆಸಲು ಸಹಾಯವಾಗುವುದಾಗಿ ಆಶ್ವಾಸನೆ ಕೊಟ್ಟರು. ಶ್ರೀ ಕೊಟ್ರೇಶ್, ಕಾರ್ಯದರ್ಶಿ ಸ್ವಾಗತಿಸಿದರು. ಶ್ರೀ ದ್ವಾರಕೀಶ ರೆಡ್ಡಿ. ಖಜಾಂಚಿ ವಂದನಾರ್ಪಣೆ ಮಾಡಿದರು.

## ಚಿತ್ರದುರ್ಗ

### ಸಮಾನತೆ ಬೆಳೆಸಲು ಶಿಕ್ಷಕರಿಗೆ ಸಲಹೆ

ರಾಷ್ಟ್ರೀಯತೆ, ಭ್ರಾತೃತ್ವ, ಏಕತೆ ಹಾಗೂ ಸಮಾನತೆ ಮೂಡಿಸುವ ನಿಟ್ಟಿನಲ್ಲಿ ಸ್ಕೌಟ್ ಮತ್ತು ಗೈಡ್ಸ್ ತರಬೇತಿ ಸಹಕಾರಿಯಾಗಿದೆ ಎಂದು ಡಯಟ್ ಪ್ರಾಂಶುಪಾಲ ಎಂ. ಮಲ್ಲಣ್ಣ ಬುಧವಾರ ಹೇಳಿದರು. ಜಿಲ್ಲಾ ಘಟಕದ ವತಿಯಿಂದ ಬುಧವಾರ ನಗರದ ವಾಸವಿ ವಿದ್ಯಾಸಂಸ್ಥೆಯಲ್ಲಿ ಆಯೋಜಿಸಿದ್ದ ಜಿಲ್ಲಾ ಮಟ್ಟದ ಸ್ಕೌಟ್ ಮತ್ತು ಗೈಡ್ಸ್ ಸಮ್ಮೇಳನ ಉದ್ಘಾಟಿಸಿ ಅವರು ಮಾತನಾಡಿದರು.

ಜಂಟಿ ರಾಜ್ಯ ಕಾರ್ಯದರ್ಶಿ(ಸ್ಕೌಟ್) ಶ್ರೀ ಎನ್. ಶ್ರೀನಿವಾಸನ್ ಮಕ್ಕಳನ್ನು ಉತ್ತಮ ಪ್ರಜೆಗಳನ್ನಾಗಿ ರೂಪಿಸುವ ನಿಟ್ಟಿನಲ್ಲಿ ಸ್ಕೌಟ್ ಮತ್ತು ಗೈಡ್ಸ್ ಅಗತ್ಯ ಎಂದರು.

ಮಾಜಿ ರಾಜ್ಯ ಆಯುಕ್ತ ಶ್ರೀ ಸಿ.ಆರ್. ಮೊಹಮ್ಮದ್ ಜಹೀರುದ್ದೀನ್ ಅಧ್ಯಕ್ಷತೆ ವಹಿಸಿದ್ದರು. ರಾಜ್ಯ ಸ್ಥಾನಿಕ ಆಯುಕ್ತ ಮಹಮ್ಮದ್ ವಾಸಿಲ್, ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ನಾರಾಯಣ ಶೆಟ್ಟಿ ಮತ್ತು ಶ್ರೀಮತಿ ಜಾನಕಿ ವೇಣುಗೋಪಾಲ್, ಶ್ರೀ ಎಸ್.ಎಸ್. ಹುಸೇನಿ, ಶ್ರೀ ಬಸವರಾಜ್ ಹಾಗೂ ಶ್ರೀ ಸತ್ಯನಾರಾಯಣ ಉಪಸ್ಥಿತರಿದ್ದರು. ಹಿಮಾಲಯ ವುಡ್‌ಬ್ಯಾಡ್ಜ್‌ನಲ್ಲಿ ತೇರ್ಗಡೆಯಾದ ಓಂಕಾರಪ್ಪ ಅವರಿಗೆ ಪ್ರಮಾಣ ಪತ್ರ ನೀಡಲಾಯಿತು. ಸ್ಕೌಟ್‌ನ ಜಿಲ್ಲಾ ಆಯುಕ್ತರು ಶ್ರೀ ಪಿ.ಎಲ್. ಸುರೇಶ್ ರಾಜು ಸ್ವಾಗತಿಸಿದರು. ಗೈಡ್ಸ್‌ನ ಜಿಲ್ಲಾ ತರಬೇತಿ ಆಯುಕ್ತೆ, ಶ್ರೀಮತಿ ಎಂ. ರತ್ನಾ ನಿರೂಪಿಸಿದರು.

# Bangalore North

Bangalore North District Association organised a Basic Training Course for Scout Masters and Cub Masters, and Lady Cub Masters from 19th to 25th July 2009, at Dr. Annie Besant Park, State Training Centre, Doddaballapur.

Sri B. Ananda Adiga, LT (S) from udupi was the Leader of the Course for Scout Master, 29 Scout Masters and 11 Lady Scout Masters, Total 40 Scout Masters underwent training in the Basic course for Scout Masters. Smt. Hema Vijayakumar LT (C) was the Leader of the Course for Cub Masters and 21 Lady Cub Masters, 6 Cub Masters, Total 27 Cub Masters underwent the Training in the Basic Course.

Sri N. Srinivasan, LT (S) and Joint State Secretary, Sri Madhav Singh LT (S) and State Training Commissioner (Scouts) visited the camp. Sri Kondajji B. Shanmukhappa, State Chief Commissioner addressed all the participants and wished them Good Luck at a meeting on 24th July 2009. Sri B.K. Sheshadri, District Secretary welcomed the gathering and introduced the participants to the Guests.

The Valedictory Function was held on 24th July 2009 at 3.00 PM. Sri Neelaiah, President of Bangalore North District was the Chief Guest. Sri Neelaiah, presented the leaders with memento on behalf of the participants and Bangalore North District.Smt. Vanitha Narayan, DC (G) falicitated Smt. Susheela Chengappa, ALT(G) Jt. Secretary, on her selection to participate in the 12th International Scout Camp at Incheon, South Korea. Grand Campfire was arranged on 24th July 2009 Sri R. Chandrashekaran declared the Camp fire open.

# Mysore

The Mysore District Organised Basic Course for Scout Masters, Guide Captains, Cub Masters and Flock Leaders at Sri Jaya chamarajendra Scout & Guide Bhavan. Mysore. 102 Teachers (Scout 53, Guide 26, Cub 12 and Flock11) attended the 7 days Basic Training Course. Sri K.G. Gopal Krishna, LT(S) Sri Sharoff Madappa, LT(S) Smt. Radhamma, ALT(C) Smt. Nagarathnamma ALT(B) were the Leaders for the Training Course Sri V.M. Ramachandra LT(S) and Dist. Organising Commissioner(S) Co-Ordinated the programme.

Sri D.S. Viswanath, Chief Executive Officer Zilla Panchayath was the Chief Guest On the occasion of the "Grand Camp Fire". Sri Purushotham, Mayor, Mysore City corporation was the Chief Guest at the Valedictory Function.

Sri P. Viswanath Dist. Chief Commisssioner presided. Dr. G. Siddesh Dist. Commissioner (S) Sri G.N. Channabasappa, Headquarters Commissioner Smt. R. Rajashree were present Sri Abdul jameel, District Secretary proposed the vote, of thanks.

***The Greatest Contribution to Education in the 20th Century was made not by an Educationist but by a Soldier who founded the Scout Movement.***

***- George Bernard Shaw***

ಕಡಿಮೆ ಬಡ್ಡಿ ದರದಲ್ಲಿ
ಮೈಸೂರು ಬ್ಯಾಂಕಿನ
ಗೃಹ ಸಾಲ
ಮತ್ತು
ಕಾರು ಸಾಲ

Avail SBM's
**Housing**
and
**Car Loans**
@





8 *
P. A.
ವಾರ್ಷಿಕ
ಬಡ್ಡಿ ದರ

*ಪರಿಷ್ಕರಣಾ ಶುಲ್ಕವಿರುವುದಿಲ್ಲ

*No Processing Charges

SBM
**Easy Home Loan**
(upto Rs. 30 Lacs)
Interest for
**1st Year - 8% p.a.** (Fixed)
**2nd & 3rd year-9% p.a.** (Fixed)
Thereafter option to continue the Loan either in Fixed or Floating rates.*

SBM
**Advantage Home Loan**
(More than Rs. 30 Lacs)
Interest for
**1st Year - 8% p.a.** (Fixed)
**2nd & 3rd year-9.5% p.a.** (Fixed)
Thereafter option to continue the Loan either in Fixed or Floating rates.*

SBM
**Ezee Car Loan**
Interest for
**1st Year - 8% p.a.** (Fixed)
**2nd & 3rd year-10% p.a.** (Fixed)
Thereafter at applicable rates.*
Ezee Car loan offer is valid till 15-10-2009

**For details contact your nearest branch or Call Help Line. 1800-425-2244 or PRI No. 080-2230 0020**



ಸ್ಟೇಟ್ ಬ್ಯಾಂಕ್ ಆಫ್ ಮೈಸೂರು
**STATE BANK OF MYSORE**
*Working for a better tomorrow*

* Conditions apply

Head Office : Mysore Bank Circle, K. G. Road, Bangalore - 560 254. www.statebankofmysore.co.in

*Your Trusted Bank Since 1913*

# ಸರ್ವಜ್ಞ

– ಗೊ.ರು. ಚನ್ನಬಸಪ್ಪ

**ಬಂದಿತು ರೋಗವೆಂದೆಂದು ನರಳಲು ಬೇಡ**
**ಬಂದುದನುಂಡು ಸುಖಿಯಾದು – ರೋಗ**
**ಬಂದಂದಿಗೇ ನರಳು ಸರ್ವಜ್ಞ!**

ಎಂದೋ ಬರುವ ರೋಗಕ್ಕಾಗಿ ಇಂದೇ ಅಳುವವರನ್ನು ಕಂಡು ಸರ್ವಜ್ಞ ಹೇಳಿರುವ ಮಾತಿದು. ಅವನ ಮಾತಿನಂತೆ ಬರಲಿರುವ ರೋಗಕ್ಕೆ ಅಳಬಾರದು ನಿಜ. ಆದರೆ ಬಂದ ರೋಗ ಹೋಗದೆಯೇ ಗಂಟು ಬಿದ್ದರೇನು ಮಾಡುವುದು? ಎಂದು ಕೇಳಿದರೆ ಅವನು ಕೊಡುವ ಪರಿಹಾರ : ನರಳುವುದು!

ಅಂತಹ ರೋಗಗ್ರಸ್ತ ವ್ಯವಸ್ಥೆಯ ಮಧ್ಯೆ ನಾವೆಲ್ಲ ನರಳುತ್ತಿದ್ದೇವೆ. ಸರ್ವಜ್ಞ ಹೇಳಿದಂತೆ ಬಂದುದನುಂಡು ಸುಖಿಯಾಗಿರೋಣವೆಂದರೆ, ಬರುವುದೆಲ್ಲ ವಿಷವಾಗಿ ಬರುವಾಗ ಸುಖಪಡುವುದು ಹೇಗೆ? ಎಂಬ ಪ್ರಶ್ನೆಗೆ ಉತ್ತರಕ್ಕಾಗಿ ಹುಡುಕಾಡುತ್ತಿದ್ದೇವೆ. ಆದರೆ ಉತ್ತರ ದೊರಕುವ ಹತ್ತಿರದ ಸಾಧ್ಯತೆಯಂತೂ ಈಗ ಇರುವಂತೆ ಕಾಣುತ್ತಿಲ್ಲ. ಹಾಗಾಗಿ, ನಮಗೆ ಬೇರೆ ದಾರಿಯಿಲ್ಲ. ವಿಷವನ್ನೇ ಅರಗಿಸಿಕೊಂಡು ಹೊಸ ಬದುಕಿನ ಸಾಧ್ಯತೆಯನ್ನು ಕಂಡುಕೊಳ್ಳಬೇಕಾಗಿದೆ.

ಸರ್ವಜ್ಞ ಜನಪರ ಕವಿ; ಜನಪದ ಕವಿ. ಉಳಿದ ಕವಿಗಳು ತಾವು ಕಂಡುದನ್ನೇ ಲೋಕ ಕಂಡಂತೆ ಎಂದು ಪರಿಭಾವಿಸಿ, ರಂಜನೆಯ ವ್ಯಂಜನವನ್ನಿಟ್ಟು ಬರೆದರೆ, ಸರ್ವಜ್ಞ ಲೋಕದ ಕಣ್ಣಿನಲ್ಲಿ ತಾನು ಕಂಡುದನ್ನು ಇದ್ದುದನ್ನು ಇದ್ದಂತೆ, ಯಾವುದೇ ಮಾತಿನ ಮರೆ–ಮೋಡಿಗಳಿಲ್ಲದೆ ನೇರವಾಗಿ ಹೇಳಿರುವ ಸಹಜ ಕವಿ; ಸತ್ಯ ಕವಿ; ಸ್ಮರಣೀಯ ಕವಿ.

ಆದರೆ ಆತ ದುರದೃಷ್ಟದ ಕವಿ. ಅವನು ತಾನಿದ್ದ ಲೋಕದ ಸಮಸ್ತ ವ್ಯಕ್ತಿ–ವಿಷಯಗಳಿಗೂ ತನ್ನ ವಿಮರ್ಶೆಯ ಬಿಸಿ ಮುಟ್ಟಿಸಿದ್ದರೂ, ಅವನಿಗೆ ಇನ್ನೂ ವೈವಿಧ್ಯಪೂರ್ಣ ವಸ್ತು–ವಿಷಯಗಳು ಬೇಕೆಂದಿದ್ದರೆ ಇಲ್ಲಿಯವರೆಗೂ ಬದುಕಬೇಕಾಗಿತ್ತು. ಬೇಕೆಂದಿದ್ದರೆ ನಮ್ಮ ಕಾಲದ ಚುನಾವಣೆಗಳು, ಅನಾಥಾಲಯದ ಮಕ್ಕಳ ಮಾರಾಟ, ಸರ್ಕಾರಿ ಅಧಿಕಾರಿಗಳು, ರಾಜಕಾರಣಿಗಳು ನಡೆಸುವ ಒಳವ್ಯವಹಾರ, ವಿಶ್ವ ವಿದ್ಯಾಲಯಗಳ ಅಂಗಳದಲ್ಲೇ ನಡೆಯುವ ಭ್ರಷ್ಟಾಚಾರ, ಶರಣರ ವಚನಾಂಕಿತಗಳನ್ನೇ ಬದಲಾಯಿಸುವ ಮತಿಭ್ರಮಣೆ, ಮಂದಿರ–ಮಸೀದಿಗಳ ಮೇಲಾಟ, ವಾಹನ ಅಪಘಾತಗಳು, ಜಾಗತೀಕರಣದ ಬಿರುಗಾಳಿ, ನಕ್ಸಲರ ಹಾವಳಿ – ಹೀಗೆ ಸಮೃದ್ಧ ವಸ್ತುಗಳು ಅವನಿಗೆ ಸಾಮಗ್ರಿಯಾಗಿ ದೊರೆಯುತ್ತಿದ್ದವು.

ಏನು ಮಾಡುವುದು ? ಸರ್ವಜ್ಞ ಈಗ ನಮ್ಮೊಡನಿಲ್ಲ. ಹಾಗಾಗಿ ಆತನು ಅಂದು ಹೇಳಿದ ತ್ರಿಪದಿಗಳನ್ನೇ ಇಂದಿನ ದಿನಮಾನಕ್ಕೆ ಅನ್ವಯಿಸಿ ಸ್ವಾರಸ್ಯ ಕಂಡರೆ ಸಂತೋಷ ಪಡಬೇಕು; ಇಲ್ಲವಾದರೆ ಸುಮ್ಮನಿರಬೇಕು; ಇಲ್ಲವೇ ದುಮ್ಮಾನ ಪಡಬೇಕು.

ಸರ್ವಜ್ಞ ಕವಿ ಆಗಿ ಹೋಗಿ ಸುಮಾರು ನಾಲ್ಕು ಶತಮಾನಗಳೇ ಕಳೆದಿವೆ. ಅದರೂ ಅವನು ಜನಮನದಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾನೆ. ಅದಕ್ಕೆ ಕಾರಣ ಅವನು ಜನಹಿತ ಚಿಂತಕನಾಗಿದ್ದುದು, ಜನಮನದ ಅಭಿವ್ಯಕಿಯಾಗಿದ್ದುದು; ಜನದನಿಯೇ ಆಗಿದ್ದುದು.

ಸರ್ವಜ್ಞನ ವಿಶೇಷವೆಂದರೆ ಯಾವುದೇ ಮುಚ್ಚು ಮರೆಯಿಲ್ಲದ ಅವನ ರೀತಿ–ನೀತಿ. "ಹೆತ್ತವಳು ಮಾಳಿ, ಎನ್ನನೊತ್ತಿ ತೆಗೆದವಳು ಕೇಳಿ (ಸೂಲಗಿತ್ತಿ), ಕತ್ತು ಬೆನ್ನ ಹಿಡಿದವಳು ಕಾಳಿ–ಮೊರದೊಳೆನ್ನ ಬೆತ್ತಲಿರಿಸಿದಳು ಸರ್ವಜ್ಞ" – ಎಂದು ತನ್ನ ಜನನ ಸಂದರ್ಭದ ಚಿತ್ರವನ್ನೇ ನಮ್ಮ ಮುಂದಿಡುತ್ತಾನೆ. ತನ್ನ ಬದುಕಿನಲ್ಲಿ ಕಂಡ ಎಲ್ಲ ಎಡರು–ತೊಡರುಗಳೂ ಅವನ ಅನುಭವದ ಮೂಟೆಯನ್ನು ತುಂಬಿಸಿವೆ. ಸರ್ವಜ್ಞ ಕಟ್ಟು ಕಥೆ ಹೇಳಿದವನಲ್ಲ; ಪಟ್ಟ ಅನುಭವವನ್ನು ಸಾರಿದವನು. ಅಂತೇ ಅವನ ಮಾತು ವಿಶ್ವಾಸಾರ್ಹ.

ಸರ್ವಜ್ಞನ ವಚನಗಳು ಹೊರನೋಟಕ್ಕೆ ಕಟುವಾಗಿ ಕಂಡರೂ ಅವುಗಳು ಸದಾ ದಿಟವನ್ನೇ ಹೇಳುತ್ತವೆ. ಅವುಗಳಲ್ಲಿರುವ ಅಂತರಂಗದ ಉತ್ಕಟತೆ ಅಷ್ಟೇ ಗಮನಾರ್ಹನಾದುದು. ಅನ್ಯಾಯ ಅಸಂಗತಗಳ ಗೋಣು ಮುರಿಯಲು ಬಾಣ ಬಿಟ್ಟರೂ, ಸರ್ವಜ್ಞಮಹಾ ಜೀವದಯಾಪರ. ಅವನ ಸಾಮಾಜಿಕ ಕಳಕಳಿ ಅನನ್ಯವಾದುದು.

ಸರ್ವಜ್ಞ ಆತ್ಮಜ್ಞಾನಿ; ಲೋಕ ಜ್ಞಾನಿ. ಎಲ್ಲರೂ ತಮ್ಮ ಮುಖ ನೋಡಿಕೊಳ್ಳಬೇಕಾದ ಕನ್ನಡಿ!

...............ಹಿಂದಿನ ಸಂಚಿಕೆಯಿಂದ

# ಅಧ್ಯಾಯ – 2 ಕಾರ್ಯಸರಣಿ

## ಶಿಬಿರಾಗ್ನಿ ಉದಂತ ಸಂ – 5

# ಕಗ್ಗಾಡು ಜೀವನಕ್ಕೆ ಶಿಕ್ಷಣ

**ಅಭಿವೃದ್ಧಿ ಪಥದಲ್ಲಿ ಮುಂದುವರೆಯಲು, ಮರಿಯೂ ಸ್ಕೌಟ್ ಅನ್ನೂ ಸ್ಕೌಟು ಹಿರಿಯ ಸ್ಕೌಟ್ ಅಥವಾ ಆದಿಪರಿಶೋಧಕನನ್ನು ತಮ್ಮ ಆದರ್ಶಗಳಿಗಾಗಿ, ತನ್ಮಯ ಭಾವದಿಂದ ನೋಡುತ್ತಾರೆ.**

ಕೆನಡಾದ ಒಬ್ಬ ಹಿರಿಯ ಸ್ಕೌಟ್ ಹಾಗೂ ಬೋನಿಗರಾದ (Trapper) 80 ವರ್ಷಗಳಿಗೂ ಮೇಲ್ಪಟ್ಟ ವಯಸ್ಸಿನ ಲೇಖಕ ಬಿಲ್ ಹ್ಯಾಮಿಲ್ಟನ್ ಎಂಬುವರು "ಬಯಲಿನಲ್ಲಿ ನನ್ನ ಅರವತ್ತು ವರ್ಷಗಳು" ಎಂಬ ಪುಸ್ತಕವನ್ನು ಬರೆದರು. ಅದರಲ್ಲಿ ಆದಿ ಪರಿಶೋಧಕರ ಸಾಹಸಮಯ ಜೀವನದಲ್ಲಿ ಎದುರಿಸಬೇಕಾಗಿ ಬರುವ ಸಂಕಷ್ಟಗಳನ್ನು ವಿವರಿಸುತ್ತಾರೆ.

"ನಾವೇಕೆ ಪದೇ ಪದೇ ಈ ರೀತಿಯ ಅಪಾಯಗಳಿಗೆ ಮೈಯ್ಯೊಡ್ಡುತ್ತೇವೆ?" ಎಂದು ಆಗಾಗ್ಗೆ ಪ್ರಶ್ನಿಸುತ್ತಾರೆ. "ಸ್ಕೌಟ್‌ನ ಹೊರಾಂಗಣ (Openair) ಜೀವನದಲ್ಲಿ ಒಂದು ರೀತಿಯ ಚಿತ್ತಾಕರ್ಷಕ ಶಕ್ತಿ ಇರುತ್ತದೆ. ಈ ಆಕರ್ಷಣೆಗೆ ಒಮ್ಮೆ ಒಳಪಟ್ಟರಾಯಿತು. ಅದರ ಬಂಧನದಿಂದ ಹೊರಬರುವುದು ಅಸಾಧ್ಯವೆನಿಸೀತು! ಪ್ರಕೃತಿ ಸಾನ್ನಿಧ್ಯದಲ್ಲಿ ಬೆಳೆದವನನ್ನು ತೋರಿಸಿ, ಅಂತಹವನು ಸತ್ಯ, ಸ್ವಾತಂತ್ರ್ಯ ಮತ್ತು ಸ್ವಾವಲಂಬನೆಗಳನ್ನು ಬೆಳೆಸಿಕೊಂಡಿರುವುದನ್ನು ಕಾಣಬಹುದು. ಅವನು ಉದಾತ್ತ ಸ್ವಭಾವದವನೂ, ಉತ್ಸಾಹಭರಿತನೂ ಆಗಿರುವುದನ್ನು ಕಾಣಬಹುದು. ಅವನು ತನ್ನ ಮಿತ್ರರೊಡನೆ ನಂಬಿಕಸ್ಥನಾಗಿರುತ್ತಾನೆ. ತನ್ನ ದೇಶಕ್ಕೆ ರಾಷ್ಟ್ರಧ್ವಜಕ್ಕೆ ನಿಷ್ಠನಾಗಿರುತ್ತಾನೆ." ಎಂದು ಹ್ಯಾಮಿಲ್ಟನ್ ಅವರೇ ಉತ್ತರಿಸಿರುತ್ತಾರೆ.

ಈ ಹಿರಿಯ ಸ್ಕೌಟ್ ಹೇಳಿರುವುದನ್ನು ನಾನು ಸಂಪೂರ್ಣವಾಗಿ, ದೃಢಪಡಿಸುತ್ತೇನೆ, ಮುಂದುವರೆದು ಇನ್ನೂ ಹೇಳುವುದಾದರೆ, ಅತಿದೂರದ ಗಡಿನಾಡು ಪ್ರದೇಶದಿಂದ ಬರುವ ಜನರು ಮತ್ತು ಅಶಿಕ್ಷಿತ ಹಾಗೂ ಅನಾಗರಿಕ ಜೀವನವನ್ನು ನಡೆಸುವವರು – ಜನಾಂಗದ ಅತಿ ಉದಾರ ಸ್ವಭಾವದ ಮತ್ತು ದುರ್ಬಲರ ರಕ್ಷಣ ಶ್ರದ್ಧೆಯುಳ್ಳ ಜನರಾಗಿರುತ್ತಾರೆ. ಅವರು ಪ್ರಕೃತಿಗೆ ಸನ್ನಿಹಿತರಾದವರಾಗಿದ್ದು, ಸಭ್ಯ ಜನರಾಗಿ ಪರಿವರ್ತಿತರಾಗಿರುತ್ತಾರೆ.

**ಕಷ್ಟಪಟ್ಟು ಆಟವಾಡಿ, ಕಷ್ಟಪಟ್ಟು ದುಡಿಯಿರಿ**

ಅಮೆರಿಕಾ ಸಂ॥ ಸಂಸ್ಥಾನಗಳ ಅಧ್ಯಕ್ಷರಾಗಿದ್ದ ಥಿಯೋಡೋರ್ ರೂಸ್‌ವೆಲ್ಟ್ (1901–1909) ರವರೂ ಸಹ ಹೊರಾಂಗಣ ಜೀವನದಲ್ಲಿ ನಂಬಿಕೆಯಿದ್ದವರು ಅವರು ಪೂರ್ವ ಆಫ್ರಿಕಾದಲ್ಲಿ ಬೇಟೆಯ ಪ್ರವಾಸವನ್ನು ಮುಗಿಸಿ, ಹಿಂದಿರುಗುವ ದಾರಿಯಲ್ಲಿ ಲಂಡನ್‌ನಲ್ಲಿ ಕೆಲವು ಬಾಲಕ ಸ್ಕೌಟ್‌ಗಳ ತನಿಖೆ ನಡೆಸಿ ಅವರ ಬಗ್ಗೆ ಹಾರ್ದಿಕವಾದ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾ:

"ನಾನು ಹೊರಾಂಗಣ ಆಟಗಳಲ್ಲಿ ನಂಬಿಕೆಯುಳ್ಳವನು. ಅವುಗಳು ಬಹಳ ಒರಟಾದುವೆಂದೂ, ಅವುಗಳಲ್ಲಿ ಭಾಗವಹಿಸುವವರು ಗಾಯಗೊಳ್ಳುವರೆಂದೂ ನಾನು ಹೆದರುವವನಲ್ಲ. ಇದಕ್ಕೆ ಹೆದರಿ, ಯುವಜನರನ್ನು ಹತ್ತಿ ಮತ್ತು ಉಣ್ಣೆ ತೊಡಿಗೆಗಳಲ್ಲಿ ಬಂಧಿಸುವವರ ಬಗ್ಗೆ ನನಗೆ ಅನುಕಂಪವಿರುವುದಿಲ್ಲ. ಜೀವನದ ಮಜಲಿನಲ್ಲಿ ಹೊರಾಂಗಣ ಜೀವನ ನಡೆಸುವ ವ್ಯಕ್ತಿಯು ಎಲ್ಲ ವೇಳೆಗಳಲ್ಲಿಯೂ ತನ್ನ ಹೆಚ್ಚುಗಾರಿಕೆಯನ್ನು ತೋರಿಸಬಲ್ಲನು. ನೀವು ಆಡುವಾಗ ಕಷ್ಟಪಟ್ಟು ಆಡಿರಿ. ಕೆಲಸ ಮಾಡುವಾಗ ಕಷ್ಟಪಟ್ಟು ಕೆಲಸ ಮಾಡಿರಿ. ಆದರೆ ನಿಮ್ಮ ಆಟಗಳು ಮತ್ತು ಕ್ರೀಡಾ ಚಟುವಟಿಕೆಗಳು, ನೀವು ಓದುವುದಕ್ಕೆ ಅಡ್ಡ ಬರದಂತೆ ಎಚ್ಚರವಹಿಸಿ". ಎಂಬುದಾಗಿ ಬರೆದರು.

ಮುಂದುವರೆಯುವುದು...............

# " Scouts and Guides are examples of " Enlightened Citizens for the society to Emulate

**- Dr. A.P.J. Abdul Kalam**

HARIDWAR Oct 16. Dr. APJ Abdul Kalam His Excellency the President of India inaugurated the 15th National Scouts and Guides Jamboree at Haridwar on 16th Oct 2005, at 3-30P.M more than 25,000 Scouts and Guides from all over the Country besides Bangladesh, Bhutan and Sri Lanka participated in the National Event.

Expressing his delight to be with the members of the Bharat Scouts and Guides on the occasion of the 15th National Jamboree Dr. A.P.J. Abdul Kalam greeted the Scouts and Guides and visualized if atleast 10 lakhs trained Bharat Scouts and Guides cadets are injected into our Society with a mission every year. It will have a positive impact on three important areas of life in the society. Since every Scout and Guide makes a promise to do his/her duty to God, to his/her Country and to help the people.

Emphasizing the needs of righteous homes the President said "If a country is to be corruption free and become a Nation of beautiful mind, there are three keys societal members who can make a difference. They are Father, Mother and the Teacher.

As a Nation we have to keep our environment clean and tidy and it has to start from home. Members of the Bharat Scouts and Guides can promote a clean habitat movement. I will make my street the cleanest street,' should be the passion of each every Bharat Scouts and Guieds cadets.

Five Point Oath for Bharat Scouts and Guides Cadets.

The Bharat Scouts and Guides cadets are examples of enlightened citizens for the society to emulate. In this way they have responsibility not only to themselves but also to the whole society. In fulfilling this mission it is good for them to cohesively articulate their roles and responsibilities. For this, I would like to administer a five point oath to all the Bharat Scouts and Guides cadets for societal transformation and national development.

**1. Righteous Homes:** I will be responsible for creating a righteous home. I realize, righteousness is one's mind brings beauty in the character. Beauty in the character blossoms harmony in the home. Harmony in the home leads to order in the Nation. Order in the Nation brings peace to our planet.

**2. Clean Home and Habitat:** I will spread a Mission of beautiful home by setting an example and advocating to the entire neighborhood, starting from home, the importance of environment. I will work towards sustainable development with no adverse impact on the environment and in fact would contribute to bettering the environment by planting trees, keeping the streets clean, and reducing the pollution.

**3. Purity of Thought:** I will spread the message of purity of thoughts among the youths and ensure that the women are respected by the society.

**4. My Life is a message:** I will ensure that all thinking and action in my life becomes a message to youth to emulate. I will lead an honest life free from all corruption and will set and an example for others to adopt a transparent way of life.

**5. Celebration of my Country:** I will celebrate every success of my Country and my fellow Citizens.

Nation building needs large number of enlightened youth. In addition to discipline, the Members of the Bharat Scouts and Guides should possess the Characteristics of indomitable spirit, a Vision leading to higher spirit of Challenging the Challenges.

Two years compulsory Bharat Scouts and Guides training providing the discipline and unity, backed by indomitable spirit, will make you a proud contributor in making India a happy, prosperous and peaceful Nation.

Courtesy: KARNATAKA SCOUT & GUIDE *news magazine*
October 2005, Issue - 9

c ವಿಜಯ ಕರ್ನಾಟಕ | ಶುಕ್ರವಾರ, 7 ಆಗಸ್ಟ್ 2009 | ಬೆಂಗಳೂರು

# ಪ್ರತಿ ಶಾಲೆ, ಕಾಲೇಜುಗಳಲ್ಲೂ ಸ್ಕೌಟ್ಸ್, ಗೈಡ್ಸ್ ಸ್ಥಾಪನೆಯಾಗಲಿ

**ವಿಕ ಸುದ್ದಿಲೋಕ**

**ಬೆಂಗಳೂರು:** 'ಸಮಾಜ ಸೇವೆಯತ್ತ ಯುವ ಮನಸ್ಸುಗಳನ್ನು ಸೆಳೆಯುವ ಸ್ಕೌಟ್ಸ್ ಮತ್ತು ಗೈಡ್ಸ್- ಪ್ರತಿ ಶಾಲೆ/ಕಾಲೇಜಿನಲ್ಲೂ ಸ್ಥಾಪನೆಯಾಗಬೇಕು' ಎಂದು ರಾಜ್ಯಪಾಲ ಎಚ್.ಆರ್. ಭಾರದ್ವಾಜ್ ಕರೆ ನೀಡಿದರು.

ರಾಜಭವನದಲ್ಲಿ ಗುರುವಾರ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ (ಕರ್ನಾಟಕ)ನ ಪೋಷಕರಾಗಿ ಅಧಿಕಾರ ಸ್ವೀಕರಿಸಿ ಅವರು ಮಾತನಾಡಿದರು.

ಶಿಸ್ತು ಮತ್ತು ರಾಷ್ಟ್ರಪ್ರೇಮವನ್ನು ಬೆಳೆಸುವ ಸ್ಕೌಟ್ಸ್ ಮತ್ತು ಗೈಡ್ಸ್‌ನತ್ತ ವಿದ್ಯಾರ್ಥಿಗಳನ್ನು ಆಕರ್ಷಿಸುವ ದಿಸೆಯಲ್ಲಿ ಕಾರ್ಯಕ್ರಮಗಳನ್ನು ರೂಪಿಸಬೇಕು. ವ್ಯಕ್ತಿತ್ವ ವಿಕಸನಕ್ಕೆ ಸ್ಕೌಟ್ಸ್‌ಗಿಂತ ಮತ್ತೊಂದು ವೇದಿಕೆ ಇಲ್ಲ ಎಂದು ಬಣ್ಣಿಸಿದ ರಾಜ್ಯಪಾಲರು, ಶಾಲಾ ದಿನಗಳಲ್ಲಿ ತಾವೂ ಸ್ಕೌಟ್ಸ್‌ನಲ್ಲಿ ಸಕ್ರಿಯರಾಗಿದ್ದನ್ನು ಸ್ಮರಿಸಿಕೊಂಡರು.

**ಸಂಸ್ಕೃತಿ ಮರೆಯಬೇಡಿ**

ನಮ್ಮ ದೇಶದ ಸಂಸ್ಕೃತಿ ಮತ್ತು ಮೌಲ್ಯಗಳನ್ನು ಅರ್ಥ ಮಾಡಿಕೊಳ್ಳಿ. ಗುರು ಹಿರಿಯರನ್ನು ಗೌರವಿಸುವುದನ್ನು ಕಲಿಯಿರಿ. ಆಗಷ್ಟೇ ದೇಶದ ಸತ್ಪ್ರಜೆಗಳಾಗಲು ಸಾಧ್ಯ ಎಂದು ಅವರು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ಯುವಜನ ಸೇವೆ ಮತ್ತು ಕ್ರೀಡಾ ಸಚಿವ ಗೂಳಿಹಟ್ಟಿ ಶೇಖರ್, 'ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಎಲ್ಲ ಅಗತ್ಯ ಪ್ರೋತ್ಸಾಹ ಮತ್ತು ನೆರವು ನೀಡಲು ಸರಕಾರ ಸಿದ್ಧ' ಎಂದು ಆಶ್ವಾಸನೆ ನೀಡಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ (ಕರ್ನಾಟಕ)ನ ಮುಖ್ಯ ಆಯುಕ್ತ ಕೊಂಡಜ್ಜಿ ಷಣ್ಮುಖಪ್ಪ, ಕೇಂದ್ರದ ಮಾಜಿ ಸಚಿವ ಎಂ.ವಿ. ರಾಜಶೇಖರನ್, ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆಯ ಪ್ರಧಾನ ಕಾರ್ಯದರ್ಶಿ ಐ.ಎಂ. ವಿಠ್ಠಲಮೂರ್ತಿ ಪಾಲ್ಗೊಂಡಿದ್ದರು.

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
# Karnataka Scout & Guide News Magazine


## ಸ್ಕೌಟಿಂಗ್ / ಗೈಡಿಂಗ್ ಎಂದರೆ

ಜೀವನ ಶಿಕ್ಷಣ
ಒಂದು ಯುವಜನ ಚಳವಳಿ
ಅಂತಾರಾಷ್ಟ್ರೀಯ
ಬೆಳೆಯುತ್ತಿದೆ
ಎಲ್ಲರಿಗೂ ಮುಕ್ತ
ಉದ್ದೇಶಪೂರ್ಣ ವಿನೋದ
ವಯಸ್ಕರಿಗೆ ಒಂದು ಸವಾಲು
ಸ್ವಪ್ರೇರಿತ
ರಾಜಕೀಯೇತರ

**ಒಂದು ವಿಧಾನ**

ವೈಯಕ್ತಿಕ ಬದ್ಧತೆ
ಮಾಡುತ್ತಾ ಕಲಿಯುವುದು
ಸಣ್ಣ ತಂಡಗಳಲ್ಲಿ ಕೆಲಸ ಮಾಡುವುದು
ಉತ್ತೇಜಕ ಕಾರ್ಯಕ್ರಮಗಳು

**ಒಂದು ಜೀವನ ಸಂಹಿತೆ**

ಒಂದು ಆಧ್ಯಾತ್ಮಿಕ ಆಯಾಮ
ಒಂದು ಸಾಮಾಜಿಕ ಆಯಾಮ
ಒಂದು ವೈಯಕ್ತಿಕ ಆಯಾಮ

**ಸ್ಕೌಟ್ ಮತ್ತು ಗೈಡ್‌ಗಳ ಪಾತ್ರ**

ವಾಸ್ತವ ಅಗತ್ಯಗಳನ್ನು ಪೂರೈಸುವುದು
ಒಂದು ಆಟ
ಶಿಕ್ಷಣ ಮತ್ತು ಸಾಧನೆ
ಬೇರೇನೂ ಅಲ್ಲ; ಒಂದು ಜೀವನ ವಿಧಾನ
ಅದರ ಮಂತ್ರ ಸೇವೆ; ಸಹಬಾಳ್ವೆ;
ಅದರ ವ್ಯಾಪ್ತಿ ಇಡೀ ಜಗತ್ತು
ಆತ್ಮ ವಿಶ್ವಾಸ, ಸಾಹಸ ಮತ್ತು ಉಲ್ಲಾಸ;
ಶಿಸ್ತು, ಸ್ವಾವಲಂಬನೆ ಮತ್ತು ದೈವಭಕ್ತಿ


Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227





**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
**ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ**
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡ್‌ರ್ (ಎಂ.ಓ)
ಮೂಲಕ ಕಳುಹಿಸಬಹುದು



Guide Captain & Guides of D.K. Zilla Panchayath Higher Primary School presenting F.D. of Rs. 18,000/- to a **Physically challenged Student Kum. Sahana**



Sri. M. Mallanna, D.D.P.I (Dev.) & Principal DIET, Chitradurga Inaugurating the Dist. Level Conference of Scouters & Guiders of Chitradurga Dist., held on 12-08-09.



Sri. M.Neelaiah, President, BS&G, Bangalore North Dist. Felicitating Smt. Susheela Chengappa, Guide Captain n her participation in an International event at South Korea, during Agugust 2009



Sri. Purushotham, Mayor, Mysore City Corporation, Sri. D.S. Viswanath, CEO, Z.P, was the Chief Guest at the Scouters & Guiders Trainning Course held at Mysore.



Scouts & Guides are participating in the Trekking Camp held on 30-7-09 at Sandur Forest Area of Bellary Dist.



Sri. K. Thimmaiah, DCC, Sri B. Siva Murthy, Member CMC, & Sri. D. Basava Raj Patel, Secretary, TME, Asson. Inaugurating Scouters & Guiders Conference on 20-7-09 at Raichur



Sri.Sunil Hegde, MLA, Haliyala, watering the plant on the accassion of Vana Mahothsava on 7-8-09




Dr. Y.N. Veerabhadrappa, DCC, and Sri Prakash Yachi, DC(S) Inaugurating the Conference of Scouters & Guiders on 15-07-09 at Hassan

Regd as News Paper (Magazine) No : CPMG/KA/BGW-549/2009-11 Permitted to Post under WPP System
Vide No.: WPP-87 of SSP, Bangalore West Posted at: Bangalore City H.P.O. on 31-09-2009

View of the participants of the 63rd Independence Day Celebrations held on 15th August 2009 at StateHeadquarters, Fort, Bangalore

Service by Scouts at D.C Office Premises, Karwar

Tree Plantation by Guides at Udupi



8. SRI.KONDAJJI B.SHANMUKHAPPA
State Chief Commissioner
Bharat Scouts and Guides, Karnataka
'Nagashree', # 23, 14th 'A' Cross,
2nd Stage, 2nd Phase, West of Chord Road,
Mahalakshmipuram, Bangalore-560086.

**If not delivered, please return to :**

**THE EDITOR**, Karnataka Scout & Guide
State Headquarters, Kondajji Basappa Rd.
Prof. P. Sivashankar Circle, Fort
Bangalore - 560 002. Ph:26701227

Published for : The Bharat Scouts & Guides, Karnataka, State Headquarters, Fort, Bangalore - 560 002. by the State Secretary
Printed at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore-560 026.
visit our website "www.scout.org.in" for details of Scout/Guide activities & On-line Karnataka Scout & Guide Magazine